# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ | 2135 |
| ಸದಸ್ಯರ ಹೆಸರು | ಶ್ರೀ ಪ್ರಕಾಶ್ ಕೆ.ರಾಥೋಡ್ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | 18.03.2022 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ದಾಳಿಂಬೆ, ದ್ರಾಕ್ಷಿ, ತೆಂಗು ಅಡಿಕೆ ಇತರೆ ತೋಟಗಾರಿಕೆ ಬೆಳೆಗಳಿಗೆ ರಾಸಾಯನಿಕ ಗೊಬ್ಬರಗಳ ಅವಶ್ಯಕತೆಯಿದ್ದು, ರಾಸಾಯನಿಕ ಗೊಬ್ಬರದ ಬೆಲೆಯು ಗಗನಕ್ಕೆ ಏರಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ದೇಶದಲ್ಲಿ ಡಿ.ಎ.ಪಿ ಮತ್ತು ಕಾಂಪ್ಲೆಕ್ಸ್ ರಸಗೊಬ್ಬರಗಳಿಗೆ ಅವಶ್ಯವಿರುವ ಕಚ್ಚಾವಸ್ತುಗಳನ್ನು ಹಾಗೂ ಶೇಕಡ 100 ರಷ್ಟು ಎಮ್.ಒ.ಪಿ ರಸಗೊಬ್ಬರವನ್ನು ಆಮದು ಮಾಡಿಕೊಳ್ಳಲಾಗುತ್ತಿದ್ದು, ಕಳೆದ ಏಳೆಂಟು ತಿಂಗಳುಗಳಿಂದ ಅಂತರರಾಷ್ಟ್ರೀಯ ಮಟ್ಟದಲ್ಲಿ ರಸಗೊಬ್ಬರ ಮಾರುಕಟ್ಟೆಯಲ್ಲಿ ಕಚ್ಚಾವಸ್ತುಗಳ ಬೆಲೆ ಏರಿಕೆಯಾದ ಹಿನ್ನೆಲೆಯಲ್ಲಿ ರಸಗೊಬ್ಬರಗಳ ಬೆಲೆಯು ಏರಿಕೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಡಿಎಪಿ ಹಾಗೂ ಪೊಟ್ಯಾಷ್ ಮುಂತಾದ ರಸಗೊಬ್ಬರಗಳ ಬೆಲೆಯು ಹೆಚ್ಚಾಗಿದ್ದು, ರೈತರು ಸಂಕಷ್ಟದಲ್ಲಿ ಸಿಲುಕಿರುವುದರಿಂದ ರಸಗೊಬ್ಬರದ ಬೆಲೆಯನ್ನು ಇಳಿಸಲು ಸರ್ಕಾರವು ಕ್ರಮ ಕೈಗೊಂಡಿದೆಯೇ? | ಡಿಎಪಿ ಹಾಗೂ ಪೊಟ್ಯಾಷ್ ಮುಂತಾದ ರಸಗೊಬ್ಬರಗಳ ಗರಿಷ್ಠ ಮಾರಾಟ ದರವನ್ನು ಸರಬರಾಜು ಸಂಸ್ಥೆಗಳಿಂದಲೇ ನಿಗಧಿಪಡಿಸಲಾಗುತ್ತದೆ. ರಸಗೊಬ್ಬರಗಳ ಬೆಲೆಗಳು ಅತಿಯಾಗಿ ಹೆಚ್ಚಾದ ಸಂದರ್ಭದಲ್ಲಿ ರೈತರಿಗೆ ತೊಂದರೆಯಾಗದಂತೆ ಕೇಂದ್ರ ಸರ್ಕಾರದಿಂದ ಆಗಿಂದಾಗ್ಗೆ ಬೆಲೆಯನ್ನು ನಿಯಂತ್ರಿಸಲು ಕ್ರಮವಹಿಸಲಾಗುತ್ತದೆ.<br><br>ದರ ನಿಗಧಿಪಡಿಸಲು ರಸಗೊಬ್ಬರದ ವಿನಿಮಯ ದರ, ಹೊಸ ಆಮದು ಬೆಲೆ, ಕಸ್ಟಮ್ಸ್ ಸುಂಕ ಹಾಗೂ ಜಿ.ಎಸ್.ಟಿ, ಬಂದರಿನಲ್ಲಿ ರಸಗೊಬ್ಬರದ ನಿರ್ವಹಣೆಯ ಇತರೆ ವೆಚ್ಚಗಳನ್ನು ಪರಿಗಣಿಸಲಾಗುತ್ತದೆ.<br><br>ಒಂದು ಟನ್ ಡಿ.ಎ.ಪಿ ರಸಗೊಬ್ಬರದ ಬೆಲೆಯು ರೂ. 57000 ಕ್ಕೆ ಹೆಚ್ಚಳವಾದ ಕಾರಣ, ಕೇಂದ್ರ ಸರ್ಕಾರವು ಡಿ.ಎ.ಪಿಯ ಪ್ರತಿ ಟನ್ ಗೆ ರೂ. 33000 ರಂತೆ ಸಹಾಯಧನವನ್ನು ಘೋಷಿಸಿ ರೈತರಿಗೆ ರೂ. 24000 (ಹಳೆಯ ದರಕ್ಕೆ) ಗೆ ದೊರೆಯುವಂತೆ ಕ್ರಮವಹಿಸಲಾಗಿದೆ. ಹಾಗಾಗಿ ಡಿ.ಎ.ಪಿ ರಸಗೊಬ್ಬರದ ಪ್ರತಿ ಚೀಲದ ದರವು ರೂ. 1,200 ಆಗಿರುತ್ತದೆ. |

| | | |
|---|---|---|
| | | ಹಾಗೂ ಪೊಟ್ಯಾಷ್ ದರವು ಪ್ರತಿ ಟನ್‌ಗೆ ರೂ. 40,147 ಎಂದು ನಿಗಧಿಪಡಿಸಲಾಗಿದ್ದರೂ ಕೇಂದ್ರ ಸರ್ಕಾರವು ಪ್ರತಿ ಟನ್ ಎಂ.ಒ.ಪಿಗೆ ರೂ. 6,070 ರಂತೆ ರಿಯಾಯಿತಿ ದರ ನಿಗಧಿಪಡಿಸಿದ್ದರಿಂದ ರೈತರಿಗೆ ಪ್ರತಿ ಟನ್‌ನ ಮಾರಾಟ ದರವು ರೂ. 34,000 ಆಗಿರುತ್ತದೆ. ಹಾಗಾಗಿ ಎಮ್.ಓ.ಪಿ ರಸಗೊಬ್ಬರದ ಪ್ರತಿ ಚೀಲದ ದರವು ರೂ. 1700 ಆಗಿರುತ್ತದೆ.<br>ಅದೇ ರೀತಿ ಪ್ರಮುಖ ಕಾಂಪ್ಲೆಕ್ಸ್ ರಸಗೊಬ್ಬರ (10:26:26, 20:20:0:13 ಮತ್ತು 12:32:16) ದ ಬೆಲೆಯು ಹೆಚ್ಚಾದ ಕಾರಣ, ಮೊದಲೇ ನಿಗಧಿಪಡಿಸಿದ್ದ ರಿಯಾಯಿತಿ ದರಕ್ಕಿಂತ ಹೆಚ್ಚಾಗಿ ಪ್ರತಿ ಟನ್ ಗೆ ರೂ.2000 ರಂತೆ ನಿಗಧಿಪಡಿಸಲಾಗಿದೆ. |

ಸಂಖ್ಯೆ: AGRI-ACT/65/2022

(ಬಿ.ಸಿ. ಪಾಟೀಲ್)
ಕೃಷಿ ಸಚಿವರು